# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 832 |
| ಸದಸ್ಯರ ಹೆಸರು | : | ಶ್ರೀ ರಘುನಾಥ್ ರಾವ್ ಮಲ್ಕಾಪೂರೆ<br>(ವಿಧಾನ ಸಭೆಯಿಂದ ಚುನಾಯಿತರಾದವರು) |
| ಉತ್ತರಿಸಬೇಕಾದ ದಿನಾಂಕ | : | 20.12.2021 |
| ಉತ್ತರಿಸುವ ಸಚಿವರು | : | ಮಾನ್ಯ ಇಂಧನ ಹಾಗೂ<br>ಕನ್ನಡ ಮತ್ತು ಸಂಸ್ಕೃತಿ ಸಚಿವರು |

*****

| | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ಜಿಲ್ಲೆಯಲ್ಲಿ 2018-19ನೇ ಸಾಲಿನಲ್ಲಿ ಇಲ್ಲಿಯವರೆಗೂ ಸಮಾಜ ಕಲ್ಯಾಣ ಇಲಾಖೆಯಿಂದ ಗಂಗಾ ಕಲ್ಯಾಣ ಯೋಜನೆಯಡಿ ಕೊರೆದ ಕೊಳವೆ ಭಾವಿಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಲು ಬಂದ ಒಟ್ಟು ಅರ್ಜಿಗಳೆಷ್ಟು; (ವರ್ಷವಾರು ಮಾಹಿತಿ ನೀಡುವುದು) | ಗುಲ್ಬರ್ಗ ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯ ಬೀದರ್ ಜಿಲ್ಲೆಯಲ್ಲಿ 2018-19 ರಿಂದ ಇಲ್ಲಿಯವರೆಗೂ ಗಂಗಾಕಲ್ಯಾಣ ಯೋಜನೆಯಡಿ ಕೊರೆದ ಕೊಳವೆ ಬಾವಿಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಲು ಎಲ್ಲಾ ಅಭಿವೃದ್ಧಿ ನಿಗಮಗಳು ಸೇರಿ ವರ್ಷವಾರು ಬಂದ ಒಟ್ಟು ಅರ್ಜಿಗಳ ಸಂಖ್ಯೆ ಈ ಕೆಳಗಿನಂತಿದೆ. |

| ವರ್ಷ | ಅರ್ಜಿಗಳ ಸಂಖ್ಯೆ |
|---|---|
| 2018-19 | 1483 |
| 2019-20 | 400 |
| 2020-21 | 268 |
| 2021-22 (ನವೆಂಬರ್-21ರ ಅಂತ್ಯಕ್ಕೆ) | 488 |
| ಒಟ್ಟು | **2639** |

2018-19 ರಿಂದ 2021-22ನೇ ಸಾಲಿನ ನವೆಂಬರ್-21 ರ ಅಂತ್ಯದವರೆಗೆ ಒಟ್ಟು-2639 ಅರ್ಜಿಗಳು ನೋಂದಣಿಗೊಂಡಿದ್ದು, ಅವುಗಳಲ್ಲಿ 2569 ಫಲಾನುಭವಿಗಳ ಕೊಳವೆ ಬಾವಿಗಳಿಗೆ ವಿದ್ಯುತ್ ಸಂಪರ್ಕ ಕಲ್ಪಿಸಲಾಗಿದ್ದು, ಬಾಕಿ 70 ಫಲಾನುಭವಿಗಳಿಗೆ ಹಂತ ಹಂತವಾಗಿ ವಿದ್ಯುತ್ ಸಂಪರ್ಕ ಕಲ್ಪಿಸಲಾಗುವುದು.

| | ಪ್ರಶ್ನೆ | ಉತ್ತರ |
|---|---|---|
| ಆ) | ಈ ಯೋಜನೆಯಡಿ ಕೊರೆದ ಕೊಳವೆ ಭಾವಿಗಳಿಗೂ ವಿದ್ಯುತ್ ಕಂಬಗಳು ವಿದ್ಯುತ್ ತಂತಿ ಹಾಗೆ ಟಿ.ಸಿ. ಮುಂತಾದವುಗಳನ್ನು ಹೊಸದಾಗಿ ಅಳವಡಿಸಲಾಗಿದೆಯೇ; ಅಥವಾ ಹಳೆಯದನ್ನು ಕಲ್ಪಿಸಲಾಗಿದೆಯೇ; (ಸಂಪೂರ್ಣ ವಿವರ ನೀಡುವುದು) | ಈ ಯೋಜನೆಯಡಿ ಕೊರೆದ ಕೊಳವೆ ಬಾವಿಗಳಿಗೆ ವಿದ್ಯುತ್ ಕಂಬಗಳು, ವಿದ್ಯುತ್ ತಂತಿ ಹಾಗೂ ಟಿ.ಸಿ. ಮುಂತಾದವುಗಳನ್ನು ಅವಶ್ಯವಿದ್ದಲ್ಲಿ ಹೊಸದಾಗಿ ಅಳವಡಿಸಿ ವಿದ್ಯುತ್ ಸಂಪರ್ಕ ಕಲ್ಪಿಸಲಾಗಿದ್ದು, ಅದರ ವಿವರಗಳು ಈ ಕೆಳಗಿನಂತಿವೆ. |

| ವರ್ಷ | ಹೆಚ್ ಟಿ ಮಾರ್ಗ (ಕಿ.ಮೀ) | ಟಿ.ಸಿ (ಸಂಖ್ಯೆ) | ಎಲ್ ಟಿ ಮಾರ್ಗ (ಕಿ.ಮೀ) | ವಿದ್ಯುತ್ ಕಂಬ (ಸಂಖ್ಯೆ) |
|---|---|---|---|---|
| 2018-19 | 249.65 | 759 | 170.74 | 8618 |
| 2019-20 | 75.85 | 382 | 121.69 | 4460 |
| 2020-21 | 43.71 | 202 | 48.13 | 1899 |
| 2021-22(ನವೆಂಬರ್ -21 ರ ಅಂತ್ಯಕ್ಕೆ) | 67.41 | 181 | 69.54 | 2789 |
| ಒಟ್ಟು | **436.62** | **1524** | **410.1** | **17766** |

| | | |
|---|---|---|
| ಇ) | ವಿದ್ಯುತ್ ಸಂಪರ್ಕ ಕಲ್ಪಿಸಲು ಇರುವ ಮಾನದಂಡಗಳೇನು; ವಿದ್ಯುತ್ ಅಳವಡಿಸಲು ಇಂಧನ ಇಲಾಖೆಯವರು ವಿಳಂಬ ಮಾಡಲು ಕಾರಣಗಳೇನು; ಈ ವಿಳಂಬಕ್ಕೆ ಕಾರಣಿಕರ್ತರಾದವರ ವಿರುದ್ಧ ಸರ್ಕಾರ ಕೈಗೊಂಡಿರುವ ಕ್ರಮಗಳೇನು? (ಮಾಹಿತಿ ನೀಡುವುದು) | ವಿದ್ಯುತ್ ಸಂಪರ್ಕ ಕಲ್ಪಿಸಲು ಸಮಾಜ ಕಲ್ಯಾಣ ಇಲಾಖೆಯಿಂದ ಧೃಡೀಕರಣ/ಮಂಜೂರಾತಿ ಪಡೆದು ಫಲಾನುಭವಿಗಳ ಪಟ್ಟಿ ಪಡೆದು ಅಗತ್ಯ ದಾಖಲೆಗಳಾದ ಪಹಣಿ ಪತ್ರ, ಜಾತಿ ಪ್ರಮಾಣ ಪತ್ರ, ಆಧಾರ ಕಾರ್ಡ್, ಕುಟುಂಬ ಗುರುತಿನ ಚೀಟಿ (Family ID), ಮೊಬೈಲ್ ಸಂಖ್ಯೆ, ಮತ್ತು ಕೊಳವೆ ಬಾವಿ ಕೊರೆದ/ ಪಂಪ್ ಅಳವಡಿಸಿದ ಧೃಡೀಕರಣ ಪತ್ರವನ್ನು ಸಂಬಂಧಪಟ್ಟ ನಿಗದಿತ ನಮೂನೆಯಲ್ಲಿ ಗಂಗಾ ಕಲ್ಯಾಣ ಅಭಿವೃದ್ಧಿ ನಿಗಮದಿಂದ ಧೃಡೀಕರಿಸಿದ ಪತ್ರವನ್ನು ಪಡೆದುಕೊಂಡು ಜೆಸ್ಕಾಂ ನಿಗದಿತ ವಿದ್ಯುತ್ ಸಂಪರ್ಕದ ಅರ್ಜಿಯೊಂದಿಗೆ ಉಪವಿಭಾಗದಲ್ಲಿ ನೋಂದಣಿ ಮಾಡಿಸಿಕೊಳ್ಳಬೇಕು.<br><br>ಈ ಮೇಲ್ಕಂಡ ಕ್ರಮಗಳನ್ನು ಪೂರ್ಣಗೊಳಿಸಿದ ನಂತರ ಕಾರ್ಯ ಮತ್ತು ಪಾಲನಾ ಘಟಕದವರು ಸ್ಥಳ ಪರಿಶೀಲಿಸಿ ಅವಶ್ಯವಿದ್ದಲ್ಲಿ ಮೂಲಭೂತ ಸೌಕರ್ಯ ಒದಗಿಸಲು ಅಂದಾಜು ಪಟ್ಟಿಯನ್ನು ತಯಾರಿಸಿ ಕಾರ್ಯಾದೇಶ ನೀಡಲು ಸಂಬಂಧಪಟ್ಟ ಉಪ ವಿಭಾಗಗಳಿಗೆ ಸಲ್ಲಿಸಲಾಗುವುದು. ಸಂಬಂಧಪಟ್ಟ ವಿಭಾಗೀಯ ಕಛೇರಿಗಳಲ್ಲಿ ಕಾರ್ಯಾದೇಶ ನೀಡಿದ ನಂತರ ಮೂಲಭೂತ ಸೌಕರ್ಯ ರಚಿಸಿ ವಿದ್ಯುತ್ ಸಂಪರ್ಕ ಒದಗಿಸಲಾಗುವುದು. ಮೂಲಭೂತ ಸೌಕರ್ಯ ಅಗತ್ಯ ಇಲ್ಲದಿದ್ದಲ್ಲಿ ಸರ್ವೀಸ್ ಕನೆಕ್ಷನ್ ಮೂಲಕ ವಿದ್ಯುತ್ ಸಂಪರ್ಕ ಒದಗಿಸಲಾಗುವುದು.<br><br>ಗಂಗಾಕಲ್ಯಾಣ ಯೋಜನೆ ಅಡಿಯಲ್ಲಿ ವಿದ್ಯುತ್ ಸಂಪರ್ಕ ಕಲ್ಪಿಸಲು ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿಯ ವತಿಯಿಂದ ಯಾವುದೇ ವಿಧವಾದ ವಿಳಂಬವಾಗಿರುವುದಿಲ್ಲ. |

ಸಂಖ್ಯೆ: ಎನರ್ಜಿ 282 ಇಬಿಎಸ್ 2021

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು
ಸಂಸ್ಕೃತಿ ಸಚಿವರು